# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 62
ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ
ಉತ್ತರಿಸುವ ಸಚಿವರು : ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 09-07-2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಬಸ್ ನಿಲ್ದಾಣಗಳಲ್ಲಿ ಮೂತ್ರಾಲಯ ಮತ್ತು ಶೌಚಾಲಯ ಹಾಗೂ ಸ್ವಚ್ಛತೆ ಕಾಪಾಡಲು ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ; | ಬಸ್ ನಿಲ್ದಾಣಗಳಲ್ಲಿನ ಮೂತ್ರಾಲಯ, ಶೌಚಾಲಯ ಮತ್ತು ಸ್ವಚ್ಚತಾ ನಿರ್ವಹಣೆ ಕಾರ್ಯಕ್ಕಾಗಿ ಕಾರ್ಮಿಕ ಇಲಾಖೆಯಲ್ಲಿ ನೊಂದಾಯಿತ ಏಜನ್ಸಿಗಳನ್ನು ಕೆ.ಟಿ.ಟಿ.ಪಿ ಕಾಯ್ದೆಯನ್ವಯ ಟೆಂಡರ್ ಮೂಲಕ ಮೂರು ವರ್ಷಗಳ ಅವಧಿಗೆ ಗುತ್ತಿಗೆ ಆಧಾರದಲ್ಲಿ ನೇಮಕ ಮಾಡುವ ಮೂಲಕ ನಿಗಮದ ವ್ಯಾಪ್ತಿಯಲ್ಲಿನ ಬಸ್ ನಿಲ್ದಾಣಗಳಲ್ಲಿನ ಮೂತ್ರಾಲಯ ಮತ್ತು ಶೌಚಾಲಯಗಳನ್ನು ನಿರ್ವಹಿಸಿ ಸ್ವಚ್ಛತೆಯನ್ನು ಕಾಪಾಡಲಾಗುತ್ತಿದೆ.<br>ಇನ್ನು ಮುಂದೆ ನಿಗಮದ ವ್ಯಾಪ್ತಿಯ ಬಸ್ ನಿಲ್ದಾಣಗಳಲ್ಲಿನ ಮೂತ್ರಾಲಯ, ಶೌಚಾಲಯ ಮತ್ತು ಆವರಣ ಸ್ವಚ್ಛತೆಯನ್ನು ಇನ್ನೂ ಉತ್ತಮವಾಗಿ ನಿರ್ವಹಿಸಲು ಅಂತರಾಷ್ಟ್ರೀಯ ಖ್ಯಾತಿಯ ಸೇವಾ ಸಂಸ್ಥೆಯಾದ ಮೆ.ಸುಲಭ್ ಇಂಟರ್‌ನ್ಯಾಷನಲ್ ರವರಿಗೆ ವಹಿಸಲು ಯೋಜಿಸಲಾಗಿದೆ. |
| ಆ | ಅವುಗಳನ್ನು ಆಧುನೀಕರಣಗೊಳಿಸಲು ಸರ್ಕಾರ ಕಾರ್ಯಕ್ರಮ ಹಾಕಿಕೊಂಡಿದೆಯೇ; ಎಷ್ಟು ದಿನಗಳಲ್ಲಿ ಆಧುನೀಕರಣಗೊಳಿಸಲಾಗುವುದು; | ನೂತನವಾಗಿ ನಿರ್ಮಿಸಿರುವ ಬಸ್ ನಿಲ್ದಾಣಗಳಲ್ಲಿ ಶೌಚಾಲಯಗಳನ್ನು ಆಧುನಿಕವಾಗಿ ನಿರ್ಮಿಸಲಾಗಿರುತ್ತದೆ. ಹಳೆಯ ಬಸ್ ನಿಲ್ದಾಣಗಳಲ್ಲಿರುವ ಶೌಚಾಲಯಗಳನ್ನು ಅನುದಾನದ ಲಭ್ಯತೆಗೆ ಅನುಗುಣವಾಗಿ ಶೀಘ್ರದಲ್ಲಿ ಆಧುನೀಕರಿಸಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಬಸ್ ನಿಲ್ದಾಣಗಳಲ್ಲಿ ಉತ್ತಮ ಗುಣಮಟ್ಟದ ಮತ್ತು ಶುಚಿರುಚಿಯ ಆಹಾರ ಪದಾರ್ಥಗಳನ್ನು ಸಾರ್ವಜನಿಕರಿಗೆ ನೀಡುವಂತಹ ಉಪಹಾರ ಮಂದಿರಗಳನ್ನು ತೆರೆಯುವ ವ್ಯವಸ್ಥೆ ಮಾಡಲಾಗಿದೆಯೇ; ಸ್ವಚ್ಛತೆ ಮತ್ತು ಗುಣಮಟ್ಟವನ್ನು ಪರೀಕ್ಷಿಸಲು ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ? | ಬಸ್ ನಿಲ್ದಾಣಗಳಲ್ಲಿ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಉಪಹಾರಗೃಹ ಸೌಲಭ್ಯವನ್ನು ಒದಗಿಸಲಾಗಿರುತ್ತದೆ.<br>ಬಸ್ ನಿಲ್ದಾಣಗಳಲ್ಲಿನ ಉಪಹಾರಗೃಹಗಳಲ್ಲಿ ಉತ್ತಮ ಗುಣಮಟ್ಟದ ಮತ್ತು ಶುಚಿರುಚಿಯ ಆಹಾರ ಪದಾರ್ಥಗಳನ್ನು ತಯಾರಿಸಿ ಸಾರ್ವಜನಿಕರಿಗೆ ನೀಡಲು, ಆಸಕ್ತಿದಾರರಿಂದ ಇ-ಟೆಂಡರ್ ಮೂಲಕ ಅರ್ಜಿ ಆಹ್ವಾನಿಸಿ, ಪರವಾನಗಿದಾರರನ್ನು ಆಯ್ಕೆ ಮಾಡಲಾಗುತ್ತದೆ.<br>ಉಪಹಾರಗೃಹದಲ್ಲಿನ ಸ್ವಚ್ಛತೆ ಮತ್ತು ಗುಣಮಟ್ಟವನ್ನು ಪರೀಕ್ಷಿಸಲು ನಿಯಮಿತವಾಗಿ ನಿಗಮದ ಅಧಿಕಾರಿಗಳು ಭೇಟಿ ನೀಡಿ, ಪರಿಶೀಲನೆ/ತಪಾಸಣೆ ನಡೆಸುತ್ತಾರೆ, ಉಪಹಾರಗೃಹದಲ್ಲಿನ ಸ್ವಚ್ಛತೆ ಮತ್ತು ಆಹಾರದ ಗುಣಮಟ್ಟವು ಸಮರ್ಪಕವಾಗಿಲ್ಲದಿದ್ದಲ್ಲಿ, ಪರವಾನಗಿದಾರರಿಗೆ ನೋಟೀಸ್ ನೀಡಲಾಗುತ್ತಿದ್ದು, ದಂಡವನ್ನು ವಿಧಿಸುವ ಕ್ರಮ ಜಾರಿಯಲ್ಲಿರುತ್ತದೆ. |

ಸಂ: ಸಾರಿಇ 78 ಸಾಸಂಪ್ರ 2018

(ಡಿ.ಸಿ. ತಮ್ಮಣ್ಣ)
ಸಾರಿಗೆ ಸಚಿವರು